# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 342 (420)
(ಕಂದಾಯ ಇಲಾಖೆಯಿಂದ ವರ್ಗಾಯಿಸಲ್ಪಟ್ಟ ಪ್ರಶ್ನೆ)

ಸದಸ್ಯರ ಹೆಸರು : ಶ್ರೀ ಆರ್. ಪ್ರಸನ್ನ ಕುಮಾರ್ ( ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 15.09.2021

ಉತ್ತರಿಸುವವರು : ಅರಣ್ಯ ಹಾಗೂ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಎಷ್ಟು ಎಕರೆ ಅರಣ್ಯ ಭೂಮಿಯನ್ನು ಕಂದಾಯ ಭೂಮಿಯಾಗಿ ಘೋಷಣೆ ಮಾಡಲು ಪ್ರಸ್ತಾವನೆಗಳು ಬಂದಿರುತ್ತದೆ; | ಅರಣ್ಯ ಭೂಮಿಯನ್ನು ಕಂದಾಯ ಭೂಮಿಯನ್ನಾಗಿ ಘೋಷಿಸಲು ಯಾವುದೇ ಪ್ರಸ್ತಾವನೆಗಳು ಇರುವುದಿಲ್ಲ. |
| ಆ) | ಇದನ್ನು ಕಂದಾಯ ಭೂಮಿಗಳಾಗಿ ಘೋಷಣೆ ಮಾಡಲು ಸರ್ಕಾರಕ್ಕೆ ಇರುವ ತೊಂದರೆಗಳೇನು; (ವಿವರ ನೀಡುವುದು) | ಅರಣ್ಯ ಭೂಮಿಯನ್ನು ಕಂದಾಯ ಭೂಮಿಗಳಾಗಿ ಘೋಷಣೆ ಮಾಡಲು ಕೇಂದ್ರ ಸರ್ಕಾರದ ಪೂರ್ವಾನುಮೋದನೆಯಲ್ಲದೇ ಮಾನ್ಯ ಸರ್ವೋಚ್ಚ ನ್ಯಾಯಾಲಯದಿಂದ ಅನುಮತಿ ಪಡೆಯುವುದು ಅವಶ್ಯವಿರುತ್ತದೆ. |
| ಇ) | ಯಾವ ಆಧಾರದ ಮೇಲೆ ಕಂದಾಯ ಭೂಮಿಯನ್ನು ಅರಣ್ಯ ಭೂಮಿಯಾಗಿ ಪರಿವರ್ತನೆ ಮಾಡಲಾಗಿದೆ; (ವಿವರ ನೀಡುವುದು) | ಯಾವುದೇ ಭೂಮಿಯನ್ನು ಜೈವಿಕ ಸಮತೋಲನ (Ecological Balance), ಪ್ರಕೃತಿ ಸಂರಕ್ಷಣೆ, ವನ್ಯಜೀವಿ ಸಂರಕ್ಷಣೆ ಹಾಗೂ ಸ್ವಾಭಾವಿಕ ಸಸ್ಯ ಸಂಪನ್ಮೂಲಗಳನ್ನು ಸಂರಕ್ಷಣೆ ಮಾಡಲು, ಪರಿಸರ ಸಮತೋಲನ ದೃಷ್ಟಿಯಿಂದ ಅರಣ್ಯ ಭೂಮಿಯನ್ನಾಗಿ ಘೋಷಿಸಲು ಕರ್ನಾಟಕ ಅರಣ್ಯ ಕಾಯ್ದೆ-1963 ಹಾಗೂ ಕರ್ನಾಟಕ ಭೂ ಕಂದಾಯ ಅಧಿನಿಯಮ-1964ರಡಿ ಸರ್ಕಾರಕ್ಕೆ ಅಧಿಕಾರವಿರುತ್ತದೆ. |
| ಈ) | ಈಗಾಗಲೇ ತಪ್ಪಾಗಿ ನಮೂದಾಗಿರುವ ಅರಣ್ಯ ಭೂಮಿಯನ್ನು ಕಂದಾಯ ಭೂಮಿಯನ್ನಾಗಿ ಪರಿವರ್ತಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಅಂತಹ ಪ್ರಕರಣಗಳಲ್ಲಿ ನಿಯಮಾನುಸಾರ ಕಂದಾಯ ಇಲಾಖೆಯಲ್ಲಿ ಕ್ರಮ ಕೈಗೊಳ್ಳಬೇಕಾಗುತ್ತದೆ. |

ಅಪಜೀ 122 ಎಫ್ ಎಎಫ್ 2021

(ಉಮೇಶ್ ವಿ. ಕತ್ತಿ)
ಅರಣ್ಯ ಹಾಗೂ ಆಹಾರ, ನಾಗರೀಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು